# ಕರ್ನಾಟಕ ವಿಧಾನ ಪರಿಷತ್ತು

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 875
2. ಸದಸ್ಯರ ಹೆಸರು : ಶ್ರೀ ಎಸ್. ರವಿ (ಸ್ಥಳೀಯ ಸಂಸ್ಥೆಗಳಿಂದ ಚುನಾಯಿತರಾದವರು)
3. ಉತ್ತರಿಸಬೇಕಾದ ದಿನಾಂಕ : 12.03.2020
4. ಉತ್ತರಿಸುವ ಸಚಿವರು : ಜಲಸಂಪನ್ಮೂಲ ಸಚಿವರು

| ಕ್ರ.ಸಂ. | ಪ್ರಶ್ನೆಗಳು | ಉತ್ತರಗಳು |
|---|---|---|
| ಅ) | ಎತ್ತಿನಹೊಳೆ ಯೋಜನೆಗಾಗಿ ಮಂಜೂರದ ಹಣವೆಷ್ಟು; ಖರ್ಚಾಗಿರುವ ಹಣವೆಷ್ಟು; ಸದರಿ ಯೋಜನೆ ಯಾವ ಹಂತದಲ್ಲಿದೆ; ಈವರೆವಿಗೂ ಮುಗಿದಿರುವ ಕಾಮಗಾರಿ ಎಷ್ಟು; ಯಾವ ಕಾಮಗಾರಿಗಳನ್ನು ನಿರ್ವಹಿಸಲಾಗಿದೆ; ಇದಕ್ಕೆ ಪಾವತಿಸಿರುವ ಮೊತ್ತವೆಷ್ಟು; | ವಿವರಗಳನ್ನು ಅನುಬಂಧದಲ್ಲಿ ಒದಗಿಸಲಾಗಿದೆ. |
| ಆ) | ಈ ಯೋಜನೆಯನ್ನು ಮುಕ್ತಾಯಗೊಳಿಸಲು ನೀಡಿರುವ ಸಮಯಾವಕಾಶ ಎಷ್ಟು; | ಈ ಯೋಜನೆಯನ್ನು 2023-24ನೇ ಸಾಲಿನಲ್ಲಿ ಪೂರ್ಣಗೊಳಿಸಲು ಯೋಜಿಸಲಾಗಿದೆ. |
| ಇ) | ಈ ಯೋಜನೆ ನಿರ್ವಹಣೆಗೆ ಇರುವ ಅಡ್ಡಿ ಆತಂಕಗಳೇನು; ನಿವಾರಣೆಗೆ ಕೈಗೊಂಡಿರುವ ಸೂಕ್ತ ಕ್ರಮಗಳೇನು? | ಸರ್ಕಾರಿ, ಖಾಸಗಿ ಹಾಗೂ ಅರಣ್ಯ ಇಲಾಖೆಗೆ ಸಂಬಂಧಿಸಿದ ಭೂಸ್ವಾಧೀನ ಪ್ರಕ್ರಿಯೆಗಳಲ್ಲಿ ಸಮಸ್ಯೆಗಳು ಉಂಟಾಗಿರುತ್ತದೆ. ಪ್ರಸ್ತುತ ಎಸ್.ಐ.ಎ ಪ್ರಕ್ರಿಯೆ ಪ್ರಗತಿಯಲ್ಲಿದೆ. |

**ಸಂಖ್ಯೆ: ಜಸಂಇ 17 ಡಬ್ಲ್ಯೂಎಲ್ಎ 2020**

(ರಮೇಶ್ ಲ. ಜಾರಕಿಹೊಳಿ)
ಜಲಸಂಪನ್ಮೂಲ ಸಚಿವರು
(ಬೃಹತ್ ಮತ್ತು ಮಧ್ಯಮ ನೀರಾವರಿ)

**ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 875ಕ್ಕೆ ಅನುಬಂಧ**

ಎತ್ತಿನಹೊಳೆ ಸಮಗ್ರ ಕುಡಿಯುವ ನೀರಿನ ಯೋಜನೆಯ ರೂ.12,912.36 ಕೋಟಿ ಮೊತ್ತದ ಪರಿಷ್ಕೃತ ಯೋಜನಾ ವರದಿಗೆ ಸರ್ಕಾರದಿಂದ ದಿನಾಂಕ:17.2.2014ರಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿರುತ್ತದೆ. ಸದರಿ ಯೋಜನೆಯಡಿ ಈವರೆವಿಗೂ ನಿರ್ವಹಿಸಲಾಗಿರುವ ಕಾಮಗಾರಿಗಳ ವಿವರ ಈ ಕೆಳಕಂಡಂತಿದೆ;

- ✓ ಹಂತ 1ರ ಏತ ಕಾಮಗಾರಿಗಳನ್ನು 5 ಪ್ಯಾಕೇಜ್‌ಗಳಲ್ಲಿ ಟೆಂಡರ್ ಮೂಲಕ ಕೈಗೆತ್ತಿಕೊಳ್ಳಲಾಗುತ್ತಿದ್ದು, 8 ವಿಯರ್‌ಗಳಲ್ಲಿ, 5 ವಿಯರ್‌ಗಳ ಕಾಮಗಾರಿಗಳು ಪೂರ್ಣಗೊಂಡಿದ್ದು, 2 ವಿಯರ್‌ಗಳ ಕಾಮಗಾರಿಗಳು ಪೂರ್ಣಗೊಳ್ಳುವ ಹಂತದಲ್ಲಿದೆ ಹಾಗೂ ಇನ್ನೊಂದು ವಿಯರ್ ಕಾಮಗಾರಿಯು ಪ್ರಗತಿಯಲ್ಲಿದೆ. 9 ಪಂಪ್‌ಹೌಸ್‌ಗಳಲ್ಲಿ 6 ಪಂಪ್‌ಹೌಸ್‌ಗಳ ಕಾಮಗಾರಿಗಳು ಪೂರ್ಣಗೊಳ್ಳುವ ಹಂತದಲ್ಲಿದ್ದು, ಉಳಿದ 3 ಪಂಪ್‌ಹೌಸ್‌ಗಳ ಕಾಮಗಾರಿಗಳೂ ಸಹಾ ಪ್ರಗತಿಯಲ್ಲಿರುತ್ತವೆ. ಒಟ್ಟಾರೆ 129.80 ಕಿ.ಮೀ. ಉದ್ದದ ರೈಸಿಂಗ್ ಮೇನ್ ಅಳವಡಿಸಲು ಎಲ್ಲಾ ಪೈಪುಗಳು ಸಿದ್ಧವಾಗಿದ್ದು, ಈಗಾಗಲೇ 106.885 ಕಿ.ಮೀ. ಉದ್ದದಷ್ಟು ಪೈಪ್ ಅಳವಡಿಸಲಾಗಿದೆ. 4 ವಿತರಣಾ ತೊಟ್ಟಿಗಳ ಪೈಕಿ, 3 ವಿತರಣಾ ತೊಟ್ಟಿಯ ಕಾಮಗಾರಿಗಳು ಈಗಾಗಲೇ ಪೂರ್ಣಗೊಂಡಿದ್ದು, ಇನ್ನೊಂದು ವಿತರಣಾ ತೊಟ್ಟಿಯ ಕಾಮಗಾರಿಯು ಮುಕ್ತಾಯ ಹಂತದಲ್ಲಿದೆ.
- ✓ ಯೋಜನೆಯ ಮೊದಲನೇ ಹಂತದ ಕಾಮಗಾರಿಗಳಿಗೆ ಅವಶ್ಯವಿರುವ 219.44 ಮೆವ್ಯಾ ವಿದ್ಯುತ್‌ಚ್ಛಕ್ತಿ ಪೂರೈಸುವ ಸಬ್‌ಸ್ಟೇಶನ್ ನಿರ್ಮಾಣದ ಕಾಮಗಾರಿ ಮತ್ತು ಟ್ರಾನ್ಸ ಮಿಷನ್ ಲೈನ್ ನಿರ್ಮಾಣ ಕಾಮಗಾರಿಗಳು ಪ್ರಗತಿಯಲ್ಲಿವೆ.
- ✓ ಎತ್ತಿನಹೊಳೆ ಸಮಗ್ರ ಕುಡಿಯುವ ನೀರಿನ ಯೋಜನೆಯಡಿಯ ಮೊದಲನೇ ಹಂತದ lift component ಕಾಮಗಾರಿಗಳನ್ನು ಪೂರ್ಣಗೊಳಿಸಿ, ಮುಂದಿನ ಮುಂಗಾರು ಹಂಗಾಮಿನಲ್ಲಿ ಪ್ರಾಯೋಗಿಕವಾಗಿ ಚಾಲನೆಗೊಳಿಸಲು ಕಾರ್ಯಕ್ರಮ ರೂಪಿಸಲಾಗಿದೆ.
- ✓ ಎತ್ತಿನಹೊಳೆ ಸಮಗ್ರ ಕುಡಿಯುವ ನೀರಿನ ಯೋಜನೆಯ ಹಂತ-2 ರಡಿಯ 260 ಕಿ.ಮೀ ಉದ್ದದ ಗುರುತ್ವಾ ಕಾಲುವೆಯ ಪೂರ್ಣ ಉದ್ದಕ್ಕೆ ಕಾಮಗಾರಿಗಳನ್ನು ಪ್ರಾರಂಭಿಸಲಾಗಿದ್ದು, ಈ ಪೈಕಿ, ಜನವರಿ 2020ರ ಅಂತ್ಯಕ್ಕೆ ಸುಮಾರು 62.17 ಕಿ.ಮೀ ಉದ್ದದ ನಾಲಾ ಕಾಮಗಾರಿಯು ಪೂರ್ಣಗೊಂಡಿದ್ದು, ಉಳಿಕೆ ಕಾಮಗಾರಿಗಳು ಪ್ರಗತಿಯಲ್ಲಿರುತ್ತವೆ.
- ✓ ಗುರುತ್ವ ಕಾಲುವೆ ಕೊನೆಯಲ್ಲಿ ಬರುವ ಕೊರಟಗೆರೆ ತಾಲ್ಲೂಕು ಭೈರಗೊಂಡ್ಲು ಜಲಾಶಯ ನಿರ್ಮಾಣ ಕಾಮಗಾರಿಯನ್ನು ಗುತ್ತಿಗೆ ವಹಿಸಲಾಗಿದ್ದು, ಕಾಮಗಾರಿಯನ್ನು ಆರಂಭಿಸಲು ಕ್ರಮ ವಹಿಸಲಾಗುತ್ತಿದೆ.
- ✓ ಬೆಂಗಳೂರು ಗ್ರಾಮಾಂತರ ಜಿಲ್ಲೆ ಮತ್ತು ರಾಮನಗರ ಜಿಲ್ಲೆಗಳಿಗೆ ಕುಡಿಯುವ ನೀರನ್ನು ಒದಗಿಸುವ ಹಾಗೂ ನೆಲಮಂಗಲ ತಾಲ್ಲೂಕಿನ 2 ಕೆರೆಗಳನ್ನು ತುಂಬಿಸುವ ರಾಮನಗರ ಫೀಡರ್ ಕಾಲುವೆಯ ಕಾಮಗಾರಿ, ತುಮಕೂರು, ಕೊರಟಗೆರೆ, ಮಧುಗಿರಿ ಮತ್ತು ಪಾವಗಡ ತಾಲ್ಲೂಕುಗಳಿಗೆ ಕುಡಿಯುವ ನೀರು ಮತ್ತು ಈ ಭಾಗದ 79 ಸಣ್ಣ ನೀರಾವರಿ ಕೆರೆಗಳಿಗೆ ನೀರನ್ನು ಒದಗಿಸುವ ಮಧುಗಿರಿ ಫೀಡರ್ ಕಾಲುವೆಯ ಕಾಮಗಾರಿ ಮತ್ತು ಗೌರಿಬಿದನೂರು ತಾಲ್ಲೂಕಿಗೆ ಕುಡಿಯುವ ನೀರಿಗಾಗಿ ಮತ್ತು ಗೌರಿಬಿದನೂರು, ಕೊರಟಗೆರೆ, ಮಧುಗಿರಿ ಮತ್ತು ದೊಡ್ಡಬಳ್ಳಾಪುರ ತಾಲ್ಲೂಕುಗಳ 107 ಸಣ್ಣ ನೀರಾವರಿ ಕೆರೆಗಳಿಗೆ ನೀರನ್ನು ಒದಗಿಸುವ ಗೌರಿಬಿದನೂರು ಫೀಡರ್ ಕಾಲುವೆಯ ಕಾಮಗಾರಿಗಳನ್ನು ಪ್ರಾರಂಭಿಸಲಾಗಿದೆ.
- ✓ ಕೋಲಾರ ಮತ್ತು ಚಿಕ್ಕಬಳ್ಳಾಪುರ ಜಿಲ್ಲೆಗಳಿಗೆ ನೀರನ್ನು ಒದಗಿಸುವ ಕುಂದಾಣ ಲಿಫ್ಟ್ ಕಾಮಗಾರಿ ಮತ್ತು ಕೋಲಾರ ಮತ್ತು ಚಿಕ್ಕಬಳ್ಳಾಪುರ ಫೀಡರ್ ಕಾಲುವೆಗಳ ಅಂದಾಜುಗಳನ್ನು ತಯಾರಿಸಲಾಗುತ್ತಿದೆ.

ಯೋಜನೆಗೆ ಪ್ರಾರಂಭದಿಂದ ಜನವರಿ 2020ರ ಅಂತ್ಯದವರೆಗೆ ರೂ.6584.96 ಕೋಟಿ ವೆಚ್ಚ ಮಾಡಲಾಗಿರುತ್ತದೆ.

*****